# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 68
ಸದಸ್ಯರ ಹೆಸರು : ಶ್ರೀ ವಿಜಯ್ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 21-09-2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ ಲಾಕ್‌ಡೌನ್ ಸಮಯದಲ್ಲಿ ವಿದ್ಯಾರ್ಥಿಗಳಿಗೆ ಆನ್‌ಲೈನ್ ತರಗತಿಯನ್ನು ನಡೆಸುತ್ತಿದ್ದು, ಈ ಭಾಗದ ಹಳ್ಳಿಗಳಲ್ಲಿ ಬಡ ವಿದ್ಯಾರ್ಥಿಗಳು ಈ ಸೌಲಭ್ಯದಿಂದ ವಂಚಿತರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಆನ್‌ಲೈನ್ ತರಗತಿಯಿಂದ ವಂಚಿತರಾದ ವಿದ್ಯಾರ್ಥಿಗಳಿಗೆ ಯಾವ ರೀತಿಯ ಸೌಲಭ್ಯಗಳನ್ನು ಒದಗಿಸಲಾಗುವುದು. | ಹೌದು ಸರ್ಕಾರ ಗಮನಿಸಿದೆ. ಹಾಗಾಗಿ ಇಲಾಖೆಯು ಮುಂದಿನಂತೆ ಕಾರ್ಯಕ್ರಮವನ್ನು ರೂಪಿಸಿ ಅನುಷ್ಠಾನಗೊಳಿಸಿದೆ.<br>ಆನ್‌ಲೈನ್ ಶಿಕ್ಷಣದ ಮಿತಿಗಳನ್ನು ಗಮನದಲ್ಲಿರಿಸಿಕೊಂಡು **'ವಿದ್ಯಾಗಮ'** ಎಂಬ ಕಲಿಕಾ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗಿದೆ. ಇದರಿಂದ ಬೀದರ್ ಜಿಲ್ಲೆಯ ಒಟ್ಟು 20,721 ವಿದ್ಯಾರ್ಥಿಗಳು ಸದುಪಯೋಗ ಪಡೆಯುತ್ತಿದ್ದಾರೆ.<br>ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ವತಿಯಿಂದ ಅನುಷ್ಠಾನಗೊಳಿಸಿರುವ **'ಸಂವೇದನ'** ವಿಡೀಯೊ ಪಾಠಗಳ ನೇರ ಪ್ರಸಾರ ಕಾರ್ಯಕ್ರಮವನ್ನು ಚಂದನ ಟಿ.ವಿ ಮುಖಾಂತರ ಬಿತ್ತರಿಸಲಾಗುತ್ತಿದೆ. ಈ ಕಾರ್ಯಕ್ರಮದಿಂದ ಸುಮಾರು 29,728 ವಿದ್ಯಾರ್ಥಿಗಳು ಸದುಪಯೋಗ ಪಡೆಯುತ್ತಿದ್ದಾರೆ. |
| ಆ) | ಈ ಭಾಗದ ಕೆಲವು ಹಳ್ಳಿಗಳಲ್ಲಿ ಬಡ ವಿದ್ಯಾರ್ಥಿಗಳು ಆರ್ಥಿಕ ತೊಂದರೆಯಿಂದ ಮೊಬೈಲ್ ಖರೀದಿಸಲು ಸಾಧ್ಯವಾಗದಿರುವುದು ಹಾಗೂ ನೆಟ್‌ವರ್ಕ್ ಸಮಸ್ಯೆಯಿಂದ ಆನ್‌ಲೈನ್ ತರಗತಿಯಲ್ಲಿ ಭಾಗವಹಿಸಲು ಸಾಧ್ಯವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇವುಗಳನ್ನು ಪರಿಹರಿಸಿ, ವಿದ್ಯಾರ್ಥಿಗಳ ಶಿಕ್ಷಣಕ್ಕೆ ನೆರವಾಗಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ? | ಹೌದು ಬಂದಿದೆ.<br>ರಾಜ್ಯದ ಎಲ್ಲಾ ಶಾಲಾ ಮಕ್ಕಳಲ್ಲಿ ಮೊಬೈಲ್ ಮತ್ತು ಅಂತರ್‌ಜಾಲ ಸೌಲಭ್ಯಗಳು ಇಲ್ಲದೆ ಇರುವುದರಿಂದ ವಿದ್ಯಾಗಮ ಕಾರ್ಯಕ್ರಮದಲ್ಲಿ 3 ವಿಧದ ಕಲಿಕಾ ಕೋಣೆಗಳನ್ನು /ತರಗತಿಗಳನ್ನು ರಚಿಸಿ, ವಿದ್ಯಾರ್ಥಿಗಳನ್ನು ಕಲಿಕೆಗೆ ತೊಡಗಿಸಲಾಗಿದೆ. ಒಂದನೇ ವಿಧದಲ್ಲಿ ಯಾವುದೇ ತಾಂತ್ರಿಕ ಪರಿಕರ ಇಲ್ಲದವರಿಗೆ ವಠಾರ ಶಾಲೆ (ಮಕ್ಕಳಿದ್ದಲ್ಲಿಗೆ ಶಿಕ್ಷಕರು ತೆರಳಿ ಒಂದು ಜನ ವಸತಿ ಪ್ರದೇಶದ ಮಕ್ಕಳನ್ನು ಒಂದಡೆ ಸೇರಿಸಿ ಎಲ್ಲಾ ಮುನ್ನೆಚ್ಚರಿಕೆ ಕ್ರಮವಹಿಸಿ ಬೋಧನೆ ಮಾಡಲಾಗುತ್ತದೆ.)ಗಳಲ್ಲಿ ವಿದ್ಯಾರ್ಥಿಗಳಿಗೆ ಶಿಕ್ಷಕರು ಕಲಿಕಾ ಅನುಭವಗಳನ್ನು ಒದಗಿಸುತ್ತಾರೆ, ಎರಡನೆಯ |

| | | |
|---|---|---|
| | | ವಿಧದಲ್ಲಿ ಕೇವಲ ಮೊಬೈಲ್ ಹೊಂದಿದವರಿಗೆ ಎಸ್.ಎಮ್.ಎಸ್ ಮೂಲಕ ಕಲಿಕಾ ವಿಷಯಾಂಶಗಳ ಬಗ್ಗೆ ಮಾಹಿತಿ ನೀಡಲಾಗುತ್ತದೆ. ಮೂರನೇ ವಿಧದಲ್ಲಿ ಅಂದರೆ ಮೊಬೈಲ್ ಇಂಟರ್‌ನೆಟ್ ಸೌಕರ್ಯ ಹೊಂದಿದವರಿಗೆ ಅನ್‌ಲೈನ್ ಪಾಠ ಮಾಡಲಾಗುತ್ತಿದೆ. |

ಸಂಖ್ಯೆ: ಇಪಿ 123 ಎಂ.ಹೆಚ್.ಟಿ 2020

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು